WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಏಪ್ರಿಲ್ ೫, ೨೦೧೨ (ಚೈತ್ರ ೧೬, ಶಕ ವರ್ಷ ೧೯೩೪) | ಸಂಚಿಕೆ ೧೪ |
|---|---|---|

## ಭಾಗ – ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಿಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು

### ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ವಾಕೈ 19 ಕೈಸೇವಿ 2012, ಬೆಂಗಳೂರು, ದಿನಾಂಕ : 23–2–2012**

ಶ್ರೀ ಟಿ. ಹೊನ್ನೂರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನೇಮಕಾತಿ ನಿರೀಕ್ಷಣೆಯಲ್ಲಿರುವ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷಾಧಿಕಾರಿ, ಎಂ.ಎಸ್.ಐ.ಎಲ್. ಸಂಸ್ಥೆ (ಮಧ್ಯ ವಿಭಾಗ) ಬೆಂಗಳೂರು ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಲ್.ಎಸ್. ವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು).

**ಪಿ.ಆರ್. 434**

### ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ವಾಕೈ 120 ಕೈಸೇವಿ 2011, ಬೆಂಗಳೂರು, ದಿನಾಂಕ : 23–2–2012**

ಶ್ರೀ ಬಿ. ಆನಂದ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ನಿಯೋಜನೆ ಮೇರೆಗೆ ಮುಖ್ಯ ಆಡಳಿತಾಧಿಕಾರಿ, ವಿಚಕ್ಷಣ ದಳ (ವಿಜಿಲೆನ್ಸ್), ಹಟ್ಟಿ ಚಿನ್ನದ ಗಣಿ ಕಂಪನಿ ನಿ., ರಾಯಚೂರು ಜಿಲ್ಲೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಇವರ ನಿಯೋಜನೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಶ್ರೀ ಬಿ. ಆನಂದ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿ, ದಾವಣಗೆರೆ, ಇಲ್ಲಿಗೆ ಸ್ವಂತ ವೇತನದ ಮೇರೆಗೆ ಹಾಗೂ ನಿಯೋಜನೆ ಮೇರೆಗೆ ನೇಮಿಸಲು ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯ ವಶಕ್ಕೆ ನೀಡಲಾಗಿದೆ.

ಸದರಿ ಅಧಿಕಾರಿಯವರು ಸಮಾಜ ಕಲ್ಯಾಣ ಇಲಾಖೆಯಿಂದ ಮರು ನಿಯೋಜನಾದೇಶ ಪಡೆಯುವವರೆಗೂ ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಯಿಂದ ಬಿಡುಗಡೆಗೊಳ್ಳತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಲ್.ಎಸ್. ವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು).

**ಪಿ.ಆರ್. 435**

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ತಿದ್ದೋಲೆ

**ಸಂಖ್ಯೆ : ಸಂವ್ಯಶಾಇ 38 ಭಾನಿವಿ 2011, ಬೆಂಗಳೂರು, ದಿನಾಂಕ : 9–3–2012**

ಭಾಷಾಂತರ ನಿರ್ದೇಶನಾಲಯದ ಸಂಶೋಧನಾಧಿಕಾರಿ ವೃಂದದ ಅಧಿಕಾರಿಗಳಿಗೆ ಸಹಾಯಕ ನಿರ್ದೇಶಕರು ಹುದ್ದೆಗಳಿಗೆ ಸ್ಥಾನಪನ್ನ ಬಡ್ತಿ ನೀಡಿ ನೇಮಿಸಲಾಗಿರುವ ಅಧಿಸೂಚನೆ ಸಂಖ್ಯೆ : ಸಂವ್ಯಶಾಇ 38 ಭಾನಿವಿ 2011, ದಿನಾಂಕ : 11–1–2012ರ ಕ್ರಮ ಸಂಖ್ಯೆ (3)ನ್ನು ಕೆಳಕಂಡಂತೆ ತಿದ್ದುಕೊಂಡು ಓದಿಕೊಳ್ಳತಕ್ಕದ್ದು.

| | | |
|---|---|---|
| 3. | ಶ್ರೀ ಸಿ.ಎಂ. ಪ್ರಭುದೇವ್, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, | ಕರ್ನಾಟಕ ವಿಧಾನ ಸಭೆ ಸಚಿವಾಲಯದ ಸಹಾಯಕ ನಿರ್ದೇಶಕರಾದ ಶ್ರೀ ಹೆಚ್.ಎನ್. ಸೋಮಶೇಖರಪ್ಪ ಇವರ ನಿಯೋಜನೆಯ ನಂತರ ಖಾಲಿಯಾಗುವ ಭಾಷಾಂತರ ನಿರ್ದೇಶನಾಲಯದ ಸಹಾಯಕ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಿ ನೇಮಿಸಲಾಗಿದೆ. |

**ಜಿ. ಶ್ರೀಧರ್**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

**ಪಿ.ಆರ್. 436**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಮಮಇ 110 ಎಸ್‌ಜೆಡಿ 2012, ಬೆಂಗಳೂರು, ದಿನಾಂಕ : 2–3–2012**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 11 ಅಸೇವ 2012, ದಿನಾಂಕ : 1–3–2012 ರಲ್ಲಿ ಶ್ರೀಮತಿ ಸತ್ಯಭಾಮ ಸಿ., ಕೆ.ಎ.ಎಸ್. (ಹಿರಿಯ ಶ್ರೇಣಿ) (ಹಾಲಿ ನೇಮಕಾತಿ ನಿರೀಕ್ಷಣೆಯಲ್ಲಿರುವವರು) ಇವರ ಸೇವೆಯನ್ನು ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಹಿಳಾ ಆಯೋಗ, ಬೆಂಗಳೂರು, ಇಲ್ಲಿನ ಖಾಲಿ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಲು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವಶಕ್ಕೆ ನೀಡಲಾಗಿದೆ.

ಶ್ರೀಮತಿ ಸತ್ಯಭಾಮ ಸಿ., ಕೆ.ಎ.ಎಸ್. (ಹಿರಿಯ ಶ್ರೇಣಿ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಹಿಳಾ ಆಯೋಗ, ಬೆಂಗಳೂರು ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಪಿ.ಆರ್. 437**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಒಇ 508 ಪಿಎಂಎಸ್ 2011, ಬೆಂಗಳೂರು, ದಿನಾಂಕ : 25–2–2012**

1872ರ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯು ಕಲಂ 7ರ (ಕೇಂದ್ರ ಕಾಯ್ದೆ ಎಕ್ಸ್ ವಿ–1872) ಅನ್ವಯ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ದಿಲ್‌ರಾಜ್ ಜೂಡ್ ರೋಹಿತ್ ಸಿಕ್ವೇರ, ನ್ಯಾಯವಾದಿಗಳು, ನಂ. 53, 3ನೇ ಮಹಡಿ, ಉಮಾಪತಿ ನಿವಾಸ, ಪ್ರೂಟ್ ಸ್ಟ್ರೀಟ್, ಶಿವಾಜಿನಗರ, ಬೆಂಗಳೂರು–560001 ಇವರನ್ನು ಮೇಲಿನ ಕಾಯ್ದೆಯಡಿಯಲ್ಲಿ ಕಾರ್ಯನಿರ್ವಹಿಸಲು ಕ್ರಿಶ್ಚಿಯನ್ ಜನಾಂಗದ ವಿವಾಹದ ನೋಂದಣಾಧಿಕಾರಿಯಾಗಿ ಬೆಂಗಳೂರು ನಗರ ಜಿಲ್ಲೆಯ ಆಡಳಿತ ವ್ಯಾಪ್ತಿಗೆ ಮಾತ್ರ ಸೀಮಿತಗೊಳಿಸಿ ಸದರಿ ಕಾಯ್ದೆಯಡಿಯಲ್ಲಿ ಸೂಚಿಸಿರುವ ಷರತ್ತುಗಳನ್ನು ಪೂರೈಸುವ ಷರತ್ತಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ರಹದಾರಿ ಮತ್ತು ವಿದೇಶಿಯರು).

**ಪಿ.ಆರ್. 438**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 224 ಸಅಸೇ 2011, ಬೆಂಗಳೂರು, ದಿನಾಂಕ : 5–3–2012**

ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಕೆಳಕಂಡ ಅಧೀನ ಕಾರ್ಯದರ್ಶಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವೇತನ ಶ್ರೇಣಿ ರೂ. 20025–28275ರ ಉಪ ಕಾರ್ಯದರ್ಶಿ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಲ್ಲಿ ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಇಲಾಖೆ | ಬಡ್ತಿ ನೀಡಿ ನೇಮಿಸಲಾದ ಹುದ್ದೆ : ಇಲಾಖೆ |
|---|---|---|
| 1. | ಶ್ರೀ ಎಂ. ವಾಸುದೇವಮೂರ್ತಿ,<br>ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ | ಉಪ ಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡಿ–ಜಂಟಿ ಕಾರ್ಯದರ್ಶಿ, ಸಿ.ಆ.ಸು.ಇ. (ಜನಸ್ಪಂದನ) ಇವರ ರಜೆಯಿಂದ ಖಾಲಿ ಇರುವ ಹುದ್ದೆಯನ್ನು ಒಂದು ದಿನದ ಮಟ್ಟಿಗೆ ಉಪ ಕಾರ್ಯದರ್ಶಿ ಹುದ್ದೆಗೆ ನಿಮ್ನೀಕರಿಸಿ ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡು ಮಾರನೇ ದಿನದಿಂದ ನಿಯೋಜನೆ ಮೇಲೆ ನಿರ್ದೇಶಕರು ಭಾಷಾಂತರ ಇಲಾಖೆ–ಖಾಲಿ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ಸಂ.ವ್ಯ.ಶಾ. ಇಲಾಖೆಯ ವಶಕ್ಕೆ ನೀಡಲಾಗಿದೆ. |
| 2. | ಶ್ರೀಮತಿ ಎಲ್. ರಾಜೇಶ್ವರಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಉಪ ಕಾರ್ಯದರ್ಶಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆ–ಶ್ರೀ ಹಿರೇಮಠ್ ಎಸ್.ಆರ್. ಇವರ ವಯೋನಿವೃತ್ತಿಯಿಂದ ತೆರವಾಗಿರುವ ಹುದ್ದೆ. |
| 3. | ಶ್ರೀ ಸುರೇಶ್ ಬಿ. ಕೃಷ್ಣಪ್ಪನವರ್, ಇಂಧನ ಇಲಾಖೆ | ಉಪ ಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡಿ–ಜಂಟಿ ಕಾರ್ಯದರ್ಶಿ, ಮಾ.ತಂ., ಜೈ.ತಂ., ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರ ರಜೆಯಿಂದ ಖಾಲಿಯಿರುವ ಹುದ್ದೆಯನ್ನು ಒಂದು ದಿನದ ಮಟ್ಟಿಗೆ ಉಪ ಕಾರ್ಯದರ್ಶಿ ಹುದ್ದೆಗೆ ನಿಮ್ನೀಕರಿಸಿ ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡು ಮಾರನೇ ದಿನದಿಂದ ಯೋಜನಾ ನಿರ್ದೇಶಕರು, ಡಿ.ಆರ್.ಡಿ.ಇ. ಕೋಶ, ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಜಿಲ್ಲೆ ಈ ಹುದ್ದೆಗೆ ನಿಯೋಜನೆ ಮೇಲೆ ನೇಮಿಸಲು ಇವರ ಸೇವೆಯನ್ನು ಗ್ರಾ.ಅ. ಮತ್ತು ಪಂ.ರಾ. ಇಲಾಖೆಯ ವಶಕ್ಕೆ ನೀಡಲಾಗಿದೆ. |
| 4. | ಶ್ರೀ ಬಿ. ವೀರಣ್ಣ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯ | ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿನ ಅಧೀನ ಕಾರ್ಯದರ್ಶಿ (ಆಡಳಿತ) ಹುದ್ದೆಯನ್ನು ಉಪ ಕಾರ್ಯದರ್ಶಿ ಹುದ್ದೆಗೆ ಮೇಲ್ದರ್ಜೆಗೇರಿಸಿ ಅದೇ ಹುದ್ದೆಯಲ್ಲಿಯೇ ಮುಂದುವರೆಸಲಾಗಿದೆ. |
| 5. | ಶ್ರೀ ಎ.ಎಂ. ಚಿದಾನಂದಸ್ವಾಮಿ, ಸಮಾಜ ಕಲ್ಯಾಣ ಇಲಾಖೆ | ಉಪ ಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡಿ ಉಪ ಕಾರ್ಯದರ್ಶಿ, ಸಹಕಾರ ಇಲಾಖೆ–ಶ್ರೀ ಎಸ್. ಚಂದ್ರಶೇಖರಪ್ಪ ಇವರ ರಜೆಯಿಂದ ಖಾಲಿ ಇರುವ ಹುದ್ದೆಯಲ್ಲಿ ಒಂದು ದಿನದ ಮಟ್ಟಿಗೆ ಕರ್ತವ್ಯಕ್ಕೆ ವರದಿ ಮಾಡಿಕೊಂಡು ಮಾರನೇ ದಿನದಿಂದ ನಿಯೋಜನೆ ಮೇಲೆ ಪ್ರಾಂಶುಪಾಲರು ಜಿಲ್ಲಾ ತರಬೇತಿ ಕೇಂದ್ರ, ಹಾವೇರಿ ಇಲ್ಲಿ ಖಾಲಿ ಇರುವ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ಸಿ.ಆ.ಸು.ಇ. (ಆಡಳಿತ ಸುಧಾರಣೆ)ಯ ವಶಕ್ಕೆ ನೀಡಲಾಗಿದೆ. |

| | | |
|---|---|---|
| 6. | ಶ್ರೀಮತಿ ಕೆ.ಎಸ್. ಸರೋಜಮ್ಮ ಅಧೀನ ಕಾರ್ಯದರ್ಶಿ. ಸಹಕಾರ ಇಲಾಖೆ (ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆಗೆ ಬಡ್ತಿಯ ನೇಮಕಾತಿ ಆದೇಶದಲ್ಲಿರುವ) | ದಿನಾಂಕ 2–1–2012ರ ನೇಮಕಾತಿ ಆದೇಶವನ್ನು ಮಾರ್ಪಡಿಸಿ ಜಂಟಿ ಕಾರ್ಯದರ್ಶಿ, ಪಶು ಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ ಈ ಹುದ್ದೆಯನ್ನು ಉಪ ಕಾರ್ಯದರ್ಶಿ ಹುದ್ದೆಗೆ ನಿಮ್ನೀಕರಿಸಿ ಸದರಿ ಖಾಲಿ ಹುದ್ದೆಗೆ ನೇಮಿಸಲಾಗಿದೆ. |
| 7. | ಶ್ರೀ ಕೆ.ವಿ. ರಾಮ, ಅಧೀನ ಕಾರ್ಯದರ್ಶಿ ಯೋಜನಾ ಇಲಾಖೆ (ಮುಖ್ಯ ಆಡಳಿತಾಧಿಕಾರಿ, ಸರ್ಕಾರಿ ವೈದ್ಯಕೀಯ ಕಾಲೇಜು, ಹಾಸನ ಇಲ್ಲಿಗೆ ಬಡ್ತಿಯ ನೇಮಕಾತಿ ಆದೇಶದಲ್ಲಿರುವ) | ದಿನಾಂಕ : 2–1–2012ರ ನೇಮಕಾತಿ ಆದೇಶವನ್ನು ಮಾರ್ಪಡಿಸಿ ಉಪ ಕಾರ್ಯದರ್ಶಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ– ಶ್ರೀಮತಿ ಎ.ಎಸ್. ಪಾರ್ವತಿ ಇವರ ವರ್ಗಾವಣೆಯಿಂದ ತೆರವಾದ ಹುದ್ದೆ. |

**ಭಾಗ–1**

ನೇಮಕಾತಿ ನಿರೀಕ್ಷಣೆಯಲ್ಲಿರುವ ಶ್ರೀಮತಿ ಹೆಚ್.ಆರ್. ಶಕುಂತಲ, ಉಪ ಕಾರ್ಯದರ್ಶಿ ಇವರನ್ನು ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮುಖ್ಯ ಆಡಳಿತಾಧಿಕಾರಿ ಕರ್ನಾಟಕ ಕಾನೂನು ಆಯೋಗ, ಬೆಂಗಳೂರು ಈ ಹುದ್ದೆಗೆ ನಿಯೋಜನೆ ಮೇಲೆ ನೇಮಿಸಲು ಇವರ ಸೇವೆಯನ್ನು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವೆಗಳು–3).

**ಪಿ.ಆರ್. 439**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಸಿಆಸುಇ 11 ಆಸೇವ 2012, ಬೆಂಗಳೂರು, ದಿನಾಂಕ : 12–3–2012

ಶ್ರೀ ಎನ್.ಹೆಚ್. ಸೂಳೇಭಾವಿ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ವಿಶೇಷ ಜಿಲ್ಲಾಧಿಕಾರಿ, ಹಿಪ್ಪರಗಿ ಯೋಜನೆ, ಅಥಣಿ, ಬೆಳಗಾಂ ಜಿಲ್ಲೆ, ಇವರನ್ನು ಅಧಿಸೂಚನೆ ಸಂಖ್ಯೆ : ಸಿಆಸುಇ 11 ಆಸೇವ 2011, ದಿನಾಂಕ : 12–12–2011 ರಲ್ಲಿ ಯೋಜನಾ ನಿರ್ದೇಶಕರು, ಡಿ.ಯು.ಡಿ.ಸಿ. ರಾಯಚೂರು ಹುದ್ದೆಗೆ ವರ್ಗಾಯಿಸಿರುವುದನ್ನು ರದ್ದುಪಡಿಸಿ ಮುಂದಿನ ಆದೇಶದವರೆಗೆ ವಿಶೇಷ ಜಿಲ್ಲಾಧಿಕಾರಿ, ಹಿಪ್ಪರಗಿ ಯೋಜನೆ, ಅಥಣಿ, ಬೆಳಗಾಂ ಜಿಲ್ಲೆ, ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ವಡಗಾವೆ ಬಸವರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.
(ಸೇವೆಗಳು–2).

**ಪಿ.ಆರ್. 440**

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 161 SAS 2012, Bangalore, dated : 9th March, 2012.

Sri Naveen, IAS, Commissioner, Social Welfare Department, Bangalore is placed in additional charge of the post of Director Government Flying Training School, Bangalore with immediate effect and until further orders.

By Order and in the name of the Governor of Karnataka,
**UJJWAL KUMAR GHOSH**
Deputy Secretary to Government,
DP & AR (Services)

**P.R. 441**

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 44 SFP 2012, Bangalore, dated : 9-3-2012.**

Sri Brijesh Kumar Dikshit, IFS (KN-88), Chief Conservator of Forests & General Manager, Karnataka State Forest Industries Corporation Limited, Bangalore is transferred with immediate effect and posted until further orders as Chief Conservator of Forests, Kodagu Circle, Madikeri vice Sri. Jayanarasimharaj, IFS transferred.

Shri Jayanarasimharaj, IFS (KN-90), Chief Conservator of Forests, Kodagu Circle, Madikeri is transferred with immediate effect and posted until further orders as Chief Conservator of Forests and General Manager, Karnataka State Forest Industries Corporation Limited, Bangalore vice Sri Brijesh Kumar Dixit, IFS transferred.

By Order and in the name of the Governor of Karnataka,
**N. SRINIVASAMURTHY**
Under Secretary to Government,
DP & AR (Services-4)

**P.R. 442**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 04 ಆಸೇವ 2012, ಬೆಂಗಳೂರು, ದಿನಾಂಕ : 2–3–2012**

2008ನೇ ಬ್ಯಾಚ್‌ನ ಕೆ.ಎ.ಎಸ್. (ಕಿರಿಯ ಶ್ರೇಣಿ) ಪ್ರೊಬೇಷನರ್ ಅಧಿಕಾರಿ ಹಾಗೂ ಚಿಕ್ಕಮಗಳೂರು ಜಿಲ್ಲಾಧಿಕಾರಿಯವರ ಕಛೇರಿಯಲ್ಲಿ ತರಬೇತಿಯಲ್ಲಿರುವ ಶ್ರೀ ಆರ್. ಪ್ರಶಾಂತ್ ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಉಪ ವಿಭಾಗಾಧಿಕಾರಿ, ಚಿಕ್ಕಮಗಳೂರು ಉಪವಿಭಾಗ, ಚಿಕ್ಕಮಗಳೂರು–ಖಾಲಿ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಲಾಗಿದೆ.

ಈ ಅಧಿಸೂಚನೆಯನ್ನು Chief Electoral Officer ಕರ್ನಾಟಕ, ಬೆಂಗಳೂರು ಇವರ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ವಡಗಾವೆ ಬಸವರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವೆಗಳು–2)

**ಪಿ.ಆರ್. 443**

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 156 SFP 2010, Bangalore, dated : 16-3-2012.**

The services of Sri Manoj Kumar Shukla, IFS (KN-89), Chief Conservator of Forests, Karnataka Power Transmission Corporation Limited, Bangalore are placed at the disposal of Director General, Indian Council of Forestry Research and Education for being appointed to the post of Conservator of Forests at Centre for Social Forestry and Eco-Rehabilitation, Alahabad on Central Deputation basis.

He is relieved from the post held by him currently under the Government of Karnataka with directions to report for duty at Centre for Social Forestry and Eco-Rehabilitation, Allahabad.

This is issued in pursuance of the communication No. 32-20/2009-ICFRE, dated : 13-9-2011, 31-12-2011 and 27-1-2012 of the Indian Council of Forestry Research and Education.

By Order and in the name of the Governor of Karnataka,
**N. SRINIVASAMURTHY**
Under Secretary to Government,
DPAR (Services-IV).

**P.R. 463**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಅಪಜೀ 056 ಅಪಸೇ 12, ಬೆಂಗಳೂರು, ದಿನಾಂಕ : 14–3–2012**

ಶ್ರೀ ಆರ್.ಆರ್. ಭಜಂತ್ರಿ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಇವರ ಸೇವೆಯನ್ನು ನಿಯೋಜನೆ ಮೇಲೆ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಶಕ್ಕೆ ನೀಡಿರುವುದನ್ನು ಹಿಂಪಡೆದು, ಇವರನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ಉಪ ವಿಭಾಗ, ರಾಯಭಾಗ ಇಲ್ಲಿ ಶ್ರೀ ಎಸ್. ಶ್ರೀನಿವಾಸ್ ರಾವ್ ರವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಪಿ.ಆರ್. 464**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಕಸಂವಾಪ್ರ 1098 ಕಸಧ 2011 (ಭಾಗ–1), ಬೆಂಗಳೂರು, ದಿನಾಂಕ : 1–3–2012**

ಶ್ರೀ ಜಿ.ಸು. ಕೃಷ್ಣ ಶೆಟ್ಟಿ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು ಇದರ ಅಧ್ಯಕ್ಷರನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಉಪ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.

**ಪಿ.ಆರ್. 465**

## ಕಂದಾಯ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಆರ್‌ಡಿ 85 ಎಎಸ್‌ಡಿ 2012, ಬೆಂಗಳೂರು, ದಿನಾಂಕ : 9–3–2012**

ಕಂದಾಯ ಇಲಾಖೆಯ ತಹಶೀಲ್ದಾರ್ ವೃಂದದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳನ್ನು ತಮ್ಮ ಹಾಲಿ ಹುದ್ದೆಯ ದೈನಂದಿನ ಕೆಲಸದ ಜೊತೆಯಲ್ಲಿ ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಚುನಾವಣಾ ಕಾರ್ಯವನ್ನು ನಿರ್ವಹಿಸಲು ಹಾಗೂ ಚುನಾವಣಾ ಪ್ರಕ್ರಿಯೆ ಮುಗಿಯುವವರೆಗೆ ಚುನಾವಣಾ ಕಾರ್ಯಕ್ಕೆ ಈ ತಕ್ಷಣದಿಂದ ಜಾರಿಗೆ ಬರುವಂತೆ ನಿಯೋಜಿಸಿ ಆದೇಶಿಸಿದೆ.

| ಕ್ರ ಸಂ. | ತಹಶೀಲ್ದಾರರ ಹೆಸರು ಮತ್ತು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಕರ್ತವ್ಯ ನಿರ್ವಹಿಸಬೇಕಾದ ವಿವರ |
|---|---|---|
| 1. | ಶ್ರೀ ಎ.ಆರ್. ರವೀಂದ್ರ, ತಹಶೀಲ್ದಾರ್/ಆಡಿಟರ್, ಕಂದಾಯ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು | ಕೇಂದ್ರ ಚುನಾವಣಾಧಿಕಾರಿಗಳಿಗೆ ಸಹಾಯಕ ಚುನಾವಣಾಧಿಕಾರಿಯಾಗಿ ಕೇಂದ್ರ ಕಛೇರಿಯಲ್ಲಿ ಹಾಜರಿದ್ದು, ನಾಮಪತ್ರಗಳ ಸ್ವೀಕಾರ, ಮತ ಎಣಿಕೆ ಹಾಗೂ ಇತರೆ ಚುನಾವಣಾ ಕೆಲಸಗಳನ್ನು ನಿರ್ವಹಿಸುವುದು. |
| 2. | ಶ್ರೀಮತಿ ಹರಿಶಿಲ್ಪ, ವಿಶೇಷ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ. | ಬೆಂಗಳೂರು ನಗರ ಜಿಲ್ಲೆಗೆ ಜಿಲ್ಲಾ ಕ.ಸಾ.ಪ. ಚುನಾವಣಾಧಿಕಾರಿಗಳಾಗಿ, ನಾಮಪತ್ರಗಳ ಸ್ವೀಕಾರ, ನಾಮಪತ್ರಗಳ ಪರಿಶೀಲನೆ, ಎಣಿಕೆ ಕಾರ್ಯ, ಜಿಲ್ಲಾಧ್ಯಕ್ಷರ ಫಲಿತಾಂಶ ಪ್ರಕಟಣೆ ಹಾಗೂ ಘೋಷಣೆ ಇತ್ಯಾದಿ ಚುನಾವಣೆ ಕಾರ್ಯಗಳನ್ನು ನಡೆಸುವುದು. |

| ಕ್ರ. ಸಂ. | ತಹಶೀಲ್ದಾರರ ಹೆಸರು ಮತ್ತು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಕರ್ತವ್ಯ ನಿರ್ವಹಿಸಬೇಕಾದ ವಿವರ |
|---|---|---|
| 3. | ಶ್ರೀ ಆರ್. ಶ್ರೀನಿವಾಸಯ್ಯ, ತಹಶೀಲ್ದಾರ್, ಬಿ.ಎಂ.ಆರ್.ಸಿ.ಎಲ್. 2ನೇ ಮಹಡಿ, ಪ್ರಾದೇಶಿಕ ಆಯುಕ್ತರ ಕಛೇರಿ, ಶಾಂತಿನಗರ, ಬೆಂಗಳೂರು | ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಜಿಲ್ಲಾ ಕ.ಸಾ.ಪ. ಚುನಾವಣಾಧಿಕಾರಿಗಳಾಗಿ ನಾಮಪತ್ರಗಳ ಸ್ವೀಕಾರ, ನಾಮಪತ್ರಗಳ ಪರಿಶೀಲನೆ, ಎಣಿಕೆ ಕಾರ್ಯ ಜಿಲ್ಲಾಧ್ಯಕ್ಷರ ಫಲಿತಾಂಶ ಪ್ರಕಟಣೆ ಹಾಗೂ ಘೋಷಣೆ ಇತ್ಯಾದಿ ಚುನಾವಣೆ ಕಾರ್ಯಗಳನ್ನು ನಡೆಸುವುದು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 466**

## ಕಂದಾಯ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಕಂಇ 18 ಎಟಿಎಸ್ 2012, ಬೆಂಗಳೂರು, ದಿನಾಂಕ : 8–3–2012**

ಕಂದಾಯ ಇಲಾಖೆಯ ತಹಶೀಲ್ದಾರ್ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳನ್ನು ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಕ್ಕೆ ಸಾರ್ವಜನಿಕ/ಆಡಳಿತ ಹಿತದೃಷ್ಟಿಯಿಂದ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ಆದೇಶಿಸಿದೆ.

| ಕ್ರ. ಸಂ. | ತಹಶೀಲ್ದಾರರ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ವರ್ಗಾಯಿಸಿ ನೇಮಿಸಿದ ಸ್ಥಳ |
|---|---|---|
| **1** | **2** | **3** |
| 1. | ವಿ. ಪ್ರಸನ್ನ, ತಹಶೀಲ್ದಾರ್, ಸಾರ್ವಜನಿಕ ಸಂಪರ್ಕಾಧಿಕಾರಿ, ಮಂಗಳೂರು ಮಹಾನಗರ ಪಾಲಿಕೆ, ಮಂಗಳೂರು ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವ | ವರ್ಗಾವಣೆ ಆದೇಶವನ್ನು ಮಾರ್ಪಡಿಸಿ, ತಹಶೀಲ್ದಾರ್, ಭೂಮಿ & ಯು.ಪಿ.ಓ.ಆರ್. ಯೋಜನೆ, ಮಂಗಳೂರು ಇಲ್ಲಿಗೆ ನೇಮಿಸಲು ಇವರ ಸೇವೆಯನ್ನು ಪ್ರಧಾನ ಕಾರ್ಯದರ್ಶಿಗಳು, ಭೂಮಿ & ಯು.ಪಿ.ಓ.ಆರ್. ಇವರ ವಶಕ್ಕೆ ನೀಡಿದೆ. |
| 2. | ಶರಣಬಸಪ್ಪ ಕೊಟೆಪ್ಪಗೊಳ, ತಹಶೀಲ್ದಾರ್, ಬೀದರ್ ತಾಲ್ಲೂಕು, ಬೀದರ್ ಜಿಲ್ಲೆ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವ | ವರ್ಗಾವಣೆ ಆದೇಶವನ್ನು ಮಾರ್ಪಡಿಸಿ, ತಹಶೀಲ್ದಾರ್, ಬಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ ಇಲ್ಲಿನ ಖಾಲಿ ಹುದ್ದೆಗೆ |
| 3. | ಎಸ್. ಆಶಾ, ತಹಶೀಲ್ದಾರ್, ರಾಜ್ಯ ಚುನಾವಣಾ ಆಯೋಗ, ಬೆಂಗಳೂರು ಭೂಮಿ ಮತ್ತು ಯು.ಪಿ.ಓ.ಆರ್. ಯೋಜನೆ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವ | ವರ್ಗಾವಣೆ ಆದೇಶವನ್ನು ಮಾರ್ಪಡಿಸಿ, ತಹಶೀಲ್ದಾರ್, ರಾಜ್ಯ ಚುನಾವಣಾ ಆಯೋಗ, ಬೆಂಗಳೂರು ಇಲ್ಲಿಯೇ ಮುಂದುವರೆಸಿದೆ. |
| 4. | ಕವಿತ ರಾಜಾರಾಂ, ತಹಶೀಲ್ದಾರ್, ಕರ್ನಾಟಕ ಮುನಿಸಿಪಲ್ ರಿಫಾರ್ಮ್ಸ್ ಸೇಲ್ ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು–ಭೂಮಿ ಮತ್ತು ಯು.ಪಿ.ಓ.ಆರ್. ಯೋಜನೆ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವ | ವರ್ಗಾವಣೆ ಆದೇಶವನ್ನು ಮಾರ್ಪಡಿಸಿ, ತಹಶೀಲ್ದಾರ್, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ–ಶ್ರೀ ಮಂಜುನಾಥ್ ಇವರ ಸ್ಥಾನಕ್ಕೆ. |

| ಕ್ರ. ಸಂ. | ತಹಶೀಲ್ದಾರರ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ವರ್ಗಾಯಿಸಿ ನೇಮಿಸಿದ ಸ್ಥಳ |
|---|---|---|
| 5. | ರಮೇಶ ಎಸ್. ದೇಸಾಯಿ, ತಹಶೀಲ್ದಾರ್, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ. | ಉಪ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಧಾರವಾಡ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟೇಶಮೂರ್ತಿ**
ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು).

**ಪಿ.ಆರ್. 467**

## ಕಂದಾಯ ಸಚಿವಾಲಯ

### ಸೇರ್ಪಡೆ

**ಸಂಖ್ಯೆ : ಕಂಇ 35 ಎಎಸ್‌ಡಿ 2012, ಬೆಂಗಳೂರು, ದಿನಾಂಕ : 1–3–2012**

ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 35 ಎಎಸ್‌ಡಿ 2012, ದಿನಾಂಕ : 17–2–2012 ರಲ್ಲಿ ಎರಡನೇ ಪ್ಯಾರಾವಾಗಿ ಈ ಕೆಳಕಂಡ ಸಾಲುಗಳನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

"ಶ್ರೀ ಬಿ. ವೆಂಕಟೇಶ್, ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ, ಬೆಂಗಳೂರು ಇವರನ್ನು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರೆಸಿ ಆದೇಶಿಸಿದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 468**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 22 ಎಟಿಎಸ್ 2012, ಬೆಂಗಳೂರು, ದಿನಾಂಕ : 12–3–2012**

ಸಂಖ್ಯೆ : ಆರ್‌ಡಿ 301 ಎಎಸ್‌ಡಿ 2011, ದಿನಾಂಕ : 30–1–2012ರ ಅಧಿಸೂಚನೆಯಲ್ಲಿನ ಕ್ರಮ ಸಂಖ್ಯೆ : 109 ರಲ್ಲಿ ಶ್ರೀಮತಿ ಕೆ. ನಿರ್ಮಲದೇವಿ, ಶಿರಸ್ತೇದಾರರು, ಜಿಲ್ಲಾಧಿಕಾರಿಗಳ ಕಛೇರಿ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ ಇವರಿಗೆ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ಪದೋನ್ನತಿ ನೀಡಿ ತಹಶೀಲ್ದಾರ್, ವಿಶೇಷ ಭೂಸ್ವಾಧೀನಾಧಿಕಾರಿ ಕಛೇರಿ, ಎನ್.ಹೆಚ್.ಎ.ಐ. ಮಂಗಳೂರು ಇಲ್ಲಿಗೆ ವರ್ಗಾಯಿಸಲಾಗಿದ್ದು, ಸದರಿ ಆದೇಶವನ್ನು ಮಾರ್ಪಡಿಸಿ, ಸದರಿಯವರನ್ನು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕು ಕಛೇರಿಯಲ್ಲಿ ಹಾಲಿ ಖಾಲಿಯಿರುವ ತಹಶೀಲ್ದಾರ್ ಗ್ರೇಡ್–2 ಹುದ್ದೆಗೆ ವರ್ಗಾಯಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 469**